ನವಸಾಕ್ಷರ ಪುಸ್ತಕ ಮಾಲೆ ೩

# ಕೋಳಿ ಸಾಕಣೆ

ಎಚ್. ಎಂ. ಪರಮೇಶ್ವರಯ್ಯ








ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ-೩

# ಕೋಳಿ ಸಾಕಣೆ

ಎಚ್. ಎಂ. ಪರಮೇಶ್ವರಯ್ಯ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೧೧



**KOLI SAKANE** : by H. M. Parameshwaraiah Published by The Director of Prasaranga, Kannada University, Hampi - 583 211, KARNATAKA.
First Impression 1994, Pp. ii + 26, Rs. 8.00

---



**ಸಂಯೋಜನಾಧಿಕಾರಿ**
ಎಚ್. ಎಸ್. ಶ್ರೀಮತಿ
ಪಠ್ಯಪುಸ್ತಕ ರಚನಾ ವಿಭಾಗ



**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ ೮.೦೦**



**ಮುದ್ರಕರು**
ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್
೩/೩, ಒಂದನೇ ಮುಖ್ಯರಸ್ತೆ,
ಹೊಸ ತರಗುಪೇಟೆ,
ಬೆಂಗಳೂರು ೫೬೦ ೦೦೨




# ಕೋಳಿ ಸಾಕಣೆ

ಮುಂಜಾವದ ಕೋಳಿಯ ಕೂಗಿಗೆ ಇಡೀ ಹಳ್ಳಿ ಎಚ್ಚರಗೊಳ್ಳುತ್ತದೆ. ಇಂಪಾದ ಹಾಡಿನೊಂದಿಗೆ ಬೀಸುವಕಲ್ಲಿನ ಸದ್ದು ಕೇಳಿ ಬರುತ್ತದೆ. ಸುಮಂಗಲಿಯರು ಅಂಗಳವನ್ನು ಗುಡಿಸಿ ರಂಗವಲ್ಲಿ ಇಡುತ್ತಾರೆ. ಒಳಗೆ ಕವುಚಿದ್ದ ಕೋಳಿಗಳನ್ನು ಮೇಯಲು ಹೊರಗೆ ಬಿಡುತ್ತಾರೆ. ಎತ್ತು ನೇಗಿಲುಗಳೊಡನೆ ರೈತ ಹೊಲಕ್ಕೆ ಹೊರಡುತ್ತಾನೆ. ಹೀಗೆ ರೈತನ ನಿತ್ಯದ ಬದುಕು ಕೋಳಿಯ ಕೂಗಿನೊಂದಿಗೇ ಆರಂಭವಾಗುತ್ತದೆ. ಹಿಂದೆ ಪ್ರತಿಯೊಬ್ಬ ರೈತರು ಮನೆಗಳಲ್ಲಿ ನಾಲ್ಕಾರು ಕೋಳಿಗಳನ್ನು ಸಾಕುತ್ತಿದ್ದರು. 'ಕೋಳಿಸಾಕಣೆ' ಅಂದು ಒಂದು ಹವ್ಯಾಸವಾಗಿತ್ತು. ಆದರೆ ಇಂದು ಅದು ಒಂದು ಲಾಭದಾಯಕ ಉದ್ಯಮವಾಗಿ ಬೆಳೆದುನಿಂತಿದೆ.

'ಕೋಳಿಸಾಕಣೆ' ಬಹು ಹಿಂದಿನಿಂದಲೂ ನಮ್ಮಲ್ಲಿ ರೂಢಿಯಲ್ಲಿದ್ದಂತೆ ತಿಳಿದುಬರುತ್ತದೆ. ಅಲೆಮಾರಿಯಾಗಿದ್ದ ಆದಿಮಾನವ ಒಂದೆಡೆ ನೆಲೆನಿಂತ. ತನಗೆ ಬೇಕಾದ ಆಹಾರ ಧಾನ್ಯಗಳನ್ನು ಬೆಳೆಯಲು ತೊಡಗಿದ. ಅನೇಕ ಪ್ರಾಣಿ ಪಕ್ಷಿಗಳನ್ನು ಪಳಗಿಸಿದ. ಅಂತಹ ಹಕ್ಕಿಗಳಲ್ಲಿ ಕೋಳಿಯೂ ಒಂದು. ಮಾನವ ಕೋಳಿಗಳಿಂದ ಮೊಟ್ಟೆ ಮತ್ತು ಮಾಂಸವನ್ನು ಪಡೆಯುತ್ತಿದ್ದನೆಂದು ಚೀನಾ ಮತ್ತು ಈಜಿಪ್ಟ್ ದೇಶಗಳ ಚರಿತ್ರೆಗಳಿಂದ ತಿಳಿಯಬಹುದು.

ನಮ್ಮದು ವ್ಯವಸಾಯ ಪ್ರಧಾನವಾದ ದೇಶ. ನಮ್ಮ ವ್ಯವಸಾಯ ಬಹುಮಟ್ಟಿಗೆ ಮಳೆಯನ್ನವಲಂಬಿಸಿದೆ. ಕಾಲಕಾಲಕ್ಕೆ ಮಳೆ ಬೀಳದೆ ರೈತ ತೊಂದರೆಗೊಳಗಾಗುತ್ತಾನೆ.

ವ್ಯವಸಾಯವೊಂದನ್ನೇ ನಂಬಿಕೊಂಡರೆ ಸುಖವಾಗಿ ಬದುಕಲು ಸಾಧ್ಯವಾಗುವುದಿಲ್ಲ. ವ್ಯವಸಾಯದ ಜೊತೆಗೆ ಉಪಕಸುಬನ್ನು ರೂಢಿಸಿಕೊಂಡರೆ ಇಂತಹ ತೊಂದರೆಯಿಂದ ಪಾರಾಗಬಹುದು. ಕೋಳಿಸಾಕಣೆ ಅತ್ಯಂತ ಲಾಭದಾಯಕವಾದ ಒಂದು ಉದ್ಯಮವಾಗಿದೆ. ಆಧುನಿಕ ವಿಧಾನವನ್ನು ಅನುಸರಿಸಿದರೆ ಇದರಿಂದ ಹೆಚ್ಚಿನ ಲಾಭಗಳಿಸಬಹುದು. ಮೂರು-ನಾಲ್ಕು ದಶಕಗಳ ಹಿಂದೆ ಕೋಳಿಸಾಕಣೆ ಒಂದು ಉಪಕಸುಬಾಗಿತ್ತು. ಇತ್ತೀಚಿನ ದಿನಗಳಲ್ಲಿ ಕೋಳಿಮಾಂಸ ಮತ್ತು ಮೊಟ್ಟೆಗಳ ಬೇಡಿಕೆ ಹೆಚ್ಚುತ್ತಿದೆ. ಈ ಬೇಡಿಕೆಯನ್ನು ಪೂರೈಸಲು ಬಹಳಷ್ಟು ಜನ ಈ ಉದ್ಯಮದ ಕಡೆ ಹೊರಳುತ್ತಿದ್ದಾರೆ. ಅಧಿಕ ಬಂಡವಾಳ ತೊಡಗಿಸಿ ಸಂಕರ (ಹೈಬ್ರಿಡ್) ತಳಿಗಳ ಸಾಕಣೆ ಮತ್ತು ಉತ್ತಮ ನಿರ್ವಹಣಾ ವಿಧಾನದಿಂದ ಅಧಿಕ ಉತ್ಪಾದನೆ ಪಡೆಯುತ್ತಾ ಲಾಭಗಳಿಸುತ್ತಿದ್ದಾರೆ.

## ಕೋಳಿ ಸಾಕಣೆಯ ವಿಧಾನ

ಕೋಳಿಗಳನ್ನು ಅಧಿಕ ಸಂಖ್ಯೆಯಲ್ಲಿ ಸಾಕುವವರು, ಒಂದು ದಿನದ ಮರಿಗಳನ್ನು ತಂದು ಸಾಕುತ್ತಾರೆ. ಇಂತಹ ಮರಿಗಳನ್ನು ಎರಡು-ಮೂರು ವಾರಗಳ ಕಾಲ ಬೆಚ್ಚನೆಯ ವಾತಾವರಣದಲ್ಲಿ ಬೆಳೆಸಬೇಕು. ಅದಕ್ಕಾಗಿ ಬಿಸಿಬುಟ್ಟಿಯನ್ನು ಬಳಸುತ್ತಾರೆ. ಬಿಸಿಬುಟ್ಟಿಯೆಂದರೆ ವಿದ್ಯುತ್ ದೀಪಗಳನ್ನು ಜೋಡಿಸಿರುವ ಬಿದಿರಿನ ಬುಟ್ಟಿ. ಇಂತಹ ಒಂದು ಬುಟ್ಟಿಯ ಕೆಳಗೆ ಇನ್ನೂರರಿಂದ ಇನ್ನೂರೈವತ್ತು ಮರಿಗಳನ್ನು ಸಾಕಬಹುದು. ಮೊದಲು ನೆಲದ ಮೇಲೆ ಬತ್ತದ ಹೊಟ್ಟನ್ನು ಹಾಸಬೇಕು. ಅದರ ಮೇಲೆ ಕಾಗದವನ್ನು ಹರಡಬೇಕು. ಕಾಗದದ ಮೇಲೆ ಮರಿಗಳಿಗೆ ಸಿಕ್ಕುವಂತೆ ಆಹಾರವನ್ನು ಎರಚಬೇಕು. ಅದನ್ನು ತಿಂದು ಮರಿಗಳು ಬೆಳೆಯುತ್ತವೆ. ಬಿಸಿಬುಟ್ಟಿಯ ಕೆಳಗೆ ನೀರುಪಾತ್ರೆ ಮತ್ತು ಆಹಾರದ ಪಾತ್ರೆ ಮರಿಗಳಿಗೆ ಹತ್ತಿರದಲ್ಲೇ ಇರಬೇಕು. ಈ ರೀತಿ ಬಿಸಿಬುಟ್ಟಿಯ ಅಡಿಯಲ್ಲಿ ಮರಿಗಳನ್ನು ಸಾಕುವುದು ಹಳೆಯ ಪದ್ಧತಿ.

ಇತ್ತೀಚೆಗೆ ರಕ್ತವರ್ಣಾತೀತ (ಇನ್‌ಫ್ರಾರೆಡ್) ದೀಪಗಳ ಬೆಳಕಿನಡಿಯಲ್ಲಿ ಮರಿಗಳನ್ನು ಸಾಕುವ ವಿಧಾನ ರೂಢಿಗೆ ಬರುತ್ತಿದೆ. ಈ ದೀಪದ ಕಿರಣಗಳು ಮರಿಗಳಿಗೆ ರೋಗ ತರಬಹುದಾದ ಕ್ರಿಮಿಗಳನ್ನು ಕೊಲ್ಲುವ ಶಕ್ತಿಯನ್ನು ಹೊಂದಿರುತ್ತವೆ. ಅದರಿಂದ ಸಾಯುವ ಮರಿಗಳ ಸಂಖ್ಯೆ ಕಡಿಮೆಯಾಗುತ್ತದೆ. ಆದ್ದರಿಂದ ಕೋಳಿ ಸಾಕುವವರಿಗೆ ಹೆಚ್ಚು ಲಾಭವಾಗುತ್ತದೆ. ಇಂತಹ ಒಂದು ದೀಪದ ಕೆಳಗೆ ನೂರರಿಂದ ನೂರೈವತ್ತು ಮರಿಗಳನ್ನು ಸಾಕಬಹುದು. ಮೊದಲ ದಿನಗಳಲ್ಲಿ ಜೋಳದ ನುಚ್ಚು ಅಥವಾ ಮರಿಮೇವನ್ನು ಕಾಗದದ ಮೇಲೆ



ಬಯಲು ಪದ್ಧತಿ ಕೋಳಿ ಸಾಕಣೆ

ಎರಚಬೇಕು. ಎರಡು-ಮೂರು ವಾರಗಳ ನಂತರ ಆಹಾರವನ್ನು ಮೇವು ಪಾತ್ರೆಯಲ್ಲಿ ಕೊಡಬೇಕು. ಮರಿಗಳಿಗೆ ಕುಡಿಯಲು ಶುದ್ಧವಾದ ನೀರು ಸದಾ ದೊರೆಯುವಂತಿರಬೇಕು.

ಚಿಕ್ಕವಯಸ್ಸಿನ ಮರಿಗಳಿಗೆ ಕೆಲವು ರೋಗ ನಿರೋಧಕ ಔಷಧಿಗಳನ್ನು ನೀರಿನಲ್ಲಿ ಬೆರೆಸಿಕೊಡಬೇಕು. ಐದರಿಂದ ಏಳು ದಿನಗಳಲ್ಲಿ ಕೊಕ್ಕರೆ ರೋಗದ ವಿರುದ್ಧ ಲಸಿಕೆ ಹಾಕಿಸಬೇಕು. ಮೂರರಿಂದ ನಾಲ್ಕು ವಾರಗಳ ವಯಸ್ಸಿನ ಮರಿಗಳಲ್ಲಿ ರಕ್ತಬೇಧಿ ಕಾಣಿಸಿಕೊಳ್ಳುವುದರಿಂದ ಎಚ್ಚರಿಕೆಯಿಂದಿರಬೇಕು. ಇಂತಹ ರೋಗಗಳು ಬಂದರೆ ಕೋಳಿಗಳು ಅಧಿಕ ಸಂಖ್ಯೆಯಲ್ಲಿ ಸಾಯುತ್ತವೆ. ಆದ್ದರಿಂದ ರೋಗಗಳು ಹರಡದಂತೆ ಮುನ್ನೆಚ್ಚರಿಕೆ ವಹಿಸಬೇಕು. ಮರಿಗಳು ಬೆಳೆದ ಹಾಗೆ ಆಹಾರದ ಪ್ರಮಾಣವನ್ನು ಹೆಚ್ಚಿಸಬೇಕು.

ನೀರಿನ ಮೂಲಕ ಅಗತ್ಯ ಜೀವಸತ್ವಗಳನ್ನು ಒದಗಿಸಬೇಕು. ಮೊಟ್ಟೆಕೋಳಿಗಳು ಮತ್ತು ಮಾಂಸದ ಕೋಳಿಗಳಿಗೆ ಹೆಚ್ಚು ಸತ್ವಯುತವಾದ ಆಹಾರವನ್ನು ಒದಗಿಸಬೇಕು. ಇದರಿಂದ ಕೋಳಿಗಳ ತೂಕ ಹೆಚ್ಚಿ ಮಾಲಿಕನಿಗೆ ಲಾಭವಾಗುತ್ತದೆ. ಮಾಂಸದ ಕೋಳಿಗಳು ಬೇಗ ಬೆಳವಣಿಗೆಯನ್ನು ಪಡೆಯಬೇಕು. ಅದಕ್ಕಾಗಿ ರಾತ್ರಿಯ ಹೊತ್ತಿನಲ್ಲಿ ಕೋಳಿ ಮನೆಗಳಲ್ಲಿ ದೀಪ ಹಾಕಿರಬೇಕು. ಮರಿಗಳು ದೀಪದ ಬೆಳಕನ್ನು ಹಗಲೆಂದು ಭಾವಿಸಿ ಆಹಾರ ತಿಂದು ಬೇಗ ಬೆಳೆಯುತ್ತವೆ. ಏಳು ವಾರಗಳ ಬಳಿಕ ಮರಿಗಳು ಕಚ್ಚಾಡುತ್ತಿದ್ದರೆ, ಅವುಗಳ ಕೊಕ್ಕು ಕತ್ತರಿಸಬೇಕು. ಮರಿಗಳ ಬೆಳವಣಿಗೆ ಕುಂಠಿತವಾದರೆ ಸತ್ವಯುತವಾದ ಅನ್ನಾಂಗಗಳನ್ನು ನೀರಿನಲ್ಲಿ ಬೆರೆಸಿ ಕುಡಿಸಬೇಕು.

ಇತ್ತೀಚಿನ ದಿನಗಳಲ್ಲಿ ಮಾಂಸದ ಕೋಳಿಗಳನ್ನು, ಮೊಟ್ಟೆಕೋಳಿಗಳನ್ನು ಪಂಜರದಲ್ಲಿಟ್ಟು ಬೆಳೆಸುವ ಪದ್ಧತಿ ರೂಢಿಗೆ ಬರುತ್ತಿದೆ. ಇದರಿಂದ ಕಡಿಮೆ ಜಾಗದಲ್ಲಿ ಹೆಚ್ಚು ಕೋಳಿಗಳನ್ನು ಸಾಕಲು ಸಾಧ್ಯವಾಗುತ್ತದೆ. ಪಂಜರ ಪದ್ಧತಿಯಲ್ಲಿ ರೋಗ ಹರಡುವ ಸಾಧ್ಯತೆ ಕಡಿಮೆ. ಹೀಗೆ ಮರಿಗಳನ್ನು ಏಳೆಂಟು ವಾರಗಳವರೆಗೆ ಎಚ್ಚರಿಕೆಯಿಂದ ಬೆಳೆಸಿದಲ್ಲಿ ಅಧಿಕ ಲಾಭ ಪಡೆಯಲು ಸಾಧ್ಯವಾಗುತ್ತದೆ.

## ಕೋಳಿ ಸಾಕಣೆಯ ಪದ್ಧತಿಗಳು

ಹಿಂದಿನ ಕಾಲದಲ್ಲಿ ರೈತರು ಮನೆಗಳಲ್ಲಿ ನಾಲ್ಕಾರು ಕೋಳಿಗಳನ್ನು ಸಾಕುತ್ತಿದ್ದರು. ಅವು ಮನೆಯ ಸುತ್ತಮುತ್ತ ಓಡಾಡಿಕೊಂಡು, ಕಾಳು ಕಡ್ಡಿಯನ್ನು, ಹುಳುಹುಪ್ಪಟೆಗಳನ್ನು



ಡೀಪ್ ಲಿಟ್ಟರ್ ಪದ್ಧತಿಯ ಕೋಳಿ ಮನೆ

ಆರಿಸಿಕೊಂಡು ತಿಂದು ಬೆಳೆಯುತ್ತಿದ್ದವು. ಇದನ್ನು ಬಯಲು ಪದ್ಧತಿ ಅಥವಾ ಸಾಂಪ್ರದಾಯಿಕ ಪದ್ಧತಿಯೆಂದು ಕರೆಯುತ್ತಾರೆ. ಈ ಸಾಕಣಿಕೆ ಪದ್ಧತಿಯಲ್ಲಿ ಕೋಳಿಗಳಿಗೆ ಸಮತೋಲನ ಆಹಾರ ದೊರಕುವುದಿಲ್ಲ. ಮತ್ತು ಈ ಪದ್ಧತಿಯಲ್ಲಿ ಹೆಚ್ಚು ಕೋಳಿಗಳನ್ನೂ ಸಾಕಲಾಗುವುದಿಲ್ಲ. ಆದ್ದರಿಂದ ಈ ಬಗೆಯ ಕೋಳಿ ಸಾಕಣೆ ಲಾಭದಾಯಕವಲ್ಲ.

ಇತ್ತೀಚೆಗೆ 'ಸಾಂದ್ರ ಕೋಳಿ ಸಾಕಣೆ' ಪದ್ಧತಿಯಲ್ಲಿ ಅಧಿಕ ಸಂಖ್ಯೆಯ ಕೋಳಿಗಳನ್ನು ಸಾಕುತ್ತಾರೆ. ಈ ಪದ್ಧತಿಯಲ್ಲಿ 'ಪಂಜರ ಪದ್ಧತಿ' ಮತ್ತು 'ದಪ್ಪ ಸತ್ತೆ' (ಡೀಪ್‌ಲಿಟ್ಟರ್) ಎಂದು ಎರಡು ಬಗೆ. ವಾಣಿಜ್ಯ ದೃಷ್ಟಿಯಿಂದ ಕೋಳಿಸಾಕಣೆ ಮಾಡುವವರು ಈ ಪದ್ಧತಿಗಳನ್ನು ಅನುಸರಿಸುವರು.

## ಪಂಜರ ಪದ್ಧತಿ

ಅತಿ ಕಡಿಮೆ ಸ್ಥಳದಲ್ಲಿ ಮತ್ತು ಅತಿ ಕಡಿಮೆ ಆರಂಭಿಕ ವೆಚ್ಚದಲ್ಲಿ ಹೆಚ್ಚು ಕೋಳಿಗಳನ್ನು ಸಾಕಬಯಸುವವರಿಗೆ ಈ ಪದ್ಧತಿ ಉತ್ತಮವಾದುದು. ನಮ್ಮ ದೇಶದಲ್ಲೂ ಇತ್ತೀಚೆಗೆ ಪಂಜರ ಪದ್ಧತಿ ಕೋಳಿ ಸಾಕಣೆ ಬಳಕೆಗೆ ಬರುತ್ತಿದೆ. ಈ ಪಂಜರ ಪದ್ಧತಿಯಲ್ಲಿ ಬ್ಯಾಟರಿ ಪದ್ಧತಿ ಮತ್ತು ಕಾಲೋನಿ ಪದ್ಧತಿ ಎಂದು ಎರಡು ವಿಧಗಳಿವೆ. ಸಂಶೋಧನೆಯ ಉದ್ದೇಶದಿಂದ ಒಂದೊಂದು ಕೋಳಿಯನ್ನೂ ಪ್ರತ್ಯೇಕವಾದ ಪಂಜರದಲ್ಲಿಟ್ಟು ಬೆಳೆಸುವುದನ್ನು ಬ್ಯಾಟರಿ ಪದ್ಧತಿ ಎನ್ನುತ್ತಾರೆ. ವಾಣಿಜ್ಯ ದೃಷ್ಟಿಯಿಂದ ಒಂದೊಂದು ಪಂಜರದಲ್ಲಿ ಮೂರರಿಂದ ನಾಲ್ಕು ಕೋಳಿಗಳನ್ನು ಇಟ್ಟು ಸಾಕುತ್ತಾರೆ. ಇದನ್ನು ಕಾಲೋನಿ ಪದ್ಧತಿ ಎಂದು ಕರೆಯುತ್ತಾರೆ. ವಿದೇಶಗಳಲ್ಲಿ ಕಾಲೋನಿ ಪದ್ಧತಿ ೧೯೫೦ರಿಂದ ರೂಢಿಗೆ ಬಂದಿತು. ನಮ್ಮಲ್ಲಿ ಈ ಪದ್ಧತಿ ೧೯೬೫ರಿಂದ ಈಚೆಗೆ ಬಳಕೆಗೆ ಬಂದಿದ್ದು ಕೋಳಿಸಾಕಣೆ ಕ್ಷೇತ್ರದಲ್ಲಿ ಕ್ರಾಂತಿಯನ್ನುಂಟು ಮಾಡಿತು.

## ದಪ್ಪ ಸತ್ತೆ (ಡೀಪ್‌ಲಿಟ್ಟರ್) ಪದ್ಧತಿ

ಈ ಪದ್ಧತಿಯಲ್ಲಿ ಕೋಳಿಮನೆಯನ್ನು ಎತ್ತರವಾದ ಜಾಗದಲ್ಲಿ ಕಟ್ಟಬೇಕು. ನೆಲ ಸಮತಟ್ಟಾಗಿರಬೇಕು. ಮನೆ ವಿಶಾಲವಾಗಿದ್ದು ಗಾಳಿ ಬೆಳಕು ಬರುವಂತಿರಬೇಕು. ಕೋಳಿ ಸಾಕಣೆಗೆ

ಮೊದಲು ಮನೆಯನ್ನು ತೊಳೆಯಬೇಕು. ಸೋಂಕು ನಿವಾರಕ ಔಷಧಿಯನ್ನು ಸಿಂಪಡಿಸಬೇಕು. ಬಳಿಕ ಎರಡರಿಂದ ಆರು ಇಂಚು ದಪ್ಪವಿರುವಂತೆ ದಪ್ಪಸತ್ತೆಯನ್ನು ಹರಡಬೇಕು. ಇದಕ್ಕಾಗಿ ಬತ್ತದ ಹೊಟ್ಟು, ಮರದ ಹೊಟ್ಟು, ಗೋಧಿಬೂಸ, ಅಥವಾ ಸಣ್ಣಗೆ ಕತ್ತರಿಸಿದ ಹುಲ್ಲು ಇವುಗಳಲ್ಲಿ ಯಾವುದಾದರು ಒಂದನ್ನು ಬಳಸಬಹುದು. ಈ ಪದ್ಧತಿಯಲ್ಲಿ ಮಾಂಸದ ಕೋಳಿಗಳನ್ನು ವಿಶೇಷವಾಗಿ ಸಾಕುತ್ತಾರೆ.

ಈ ಎರಡು ಪದ್ಧತಿಗಳಿಗೂ ತಮ್ಮದೇ ಆದ ಅನುಕೂಲ, ಅನಾನುಕೂಲತೆಗಳಿವೆ. ಆದರೂ ಪಂಜರಪದ್ಧತಿಯೇ ಆಧುನಿಕ ರೀತಿಯ ಕೋಳಿಸಾಕಣೆಯಲ್ಲಿ ಹೆಚ್ಚಾಗಿ ರೂಢಿಯಲ್ಲಿದೆ.

### ಕೋಳಿ ತಳಿಗಳು

ಕೋಳಿ ಸಾಕಾಣಿಕೆ ಲಾಭದಾಯಕವಾಗಬೇಕಾದರೆ ಸಾಕಲು ಉತ್ತಮ ತಳಿಯ ಮರಿಗಳನ್ನು ಆಯ್ಕೆ ಮಾಡಿಕೊಳ್ಳಬೇಕು. ನಮ್ಮಲ್ಲಿ ಸಾಕಲು ಬಳಸುವ ತಳಿಗಳನ್ನು ದೇಶೀ ತಳಿಗಳು, ವಿದೇಶಿ ತಳಿಗಳು ಮತ್ತು ಮಿಶ್ರ ತಳಿಗಳು ಎಂದು ವಿಂಗಡಿಸುತ್ತಾರೆ.

### ದೇಶಿ ತಳಿಗಳು

ನಮ್ಮ ಹಳ್ಳಿಗಳಲ್ಲಿ ಕಂಡು ಬರುವ ನಾಟಿಕೋಳಿಗಳನ್ನು ದೇಶೀ ತಳಿಗಳೆನ್ನುತ್ತಾರೆ. ಇವುಗಳಲ್ಲಿ ರೋಗ ನಿರೋಧಕ ಶಕ್ತಿ ಅಧಿಕವಾಗಿರುತ್ತದೆ. ಇವುಗಳ ಮಾಂಸ ತುಂಬಾ ರುಚಿಕರವಾಗಿರುತ್ತದೆ. ಆದರೆ ಇವು ಒಂದು ವರ್ಷಕ್ಕೆ ಐವತ್ತರಿಂದ ಎಂಬತ್ತು ಮೊಟ್ಟೆಗಳನ್ನು ಮಾತ್ರ ಕೊಡುತ್ತವೆ. ಆದ್ದರಿಂದ ಈ ತಳಿ ವಾಣಿಜ್ಯ ದೃಷ್ಟಿಯಿಂದ ಲಾಭದಾಯಕವಲ್ಲ. ಇದರಲ್ಲಿ ಅಸೀಲ್, ಕಾಶ್ಮೀರಿ, ತಿತ್ರಿ, ಕಾಳಹಸ್ತಿ, ಚಿತ್‌ಗಾಂಗ್ ಮೊದಲಾದ ಅನೇಕ ಬಗೆಗಳಿವೆ.

### ವಿದೇಶೀ ತಳಿಗಳು

ಹೊರದೇಶದಿಂದ ನಮ್ಮ ದೇಶಕ್ಕೆ ತಂದ ಕೋಳಿಗಳನ್ನು ವಿದೇಶಿ ತಳಿಯೆನ್ನುತ್ತೇವೆ. ಇವುಗಳನ್ನು ಫಾರಂ ಕೋಳಿಗಳೆಂದೂ ಕರೆಯುತ್ತಾರೆ. ಈ ತಳಿಗಳ ಕೋಳಿಗಳು ವರ್ಷವೊಂದಕ್ಕೆ ಇನ್ನೂರೈವತ್ತರಿಂದ ಇನ್ನೂರೆಂಬತ್ತು ಮೊಟ್ಟೆಗಳನ್ನು ಕೊಡುತ್ತವೆ. ಮಾಂಸದ ತಳಿಕೋಳಿಗಳೂ ಸಹ ಬೇಗ ಬೆಳೆದು ದೊಡ್ಡವಾಗುತ್ತವೆ.

## ಮಿಶ್ರ ತಳಿಗಳು

ಎರಡು ತಳಿಗಳ ಸಂಕರದಿಂದ ಹುಟ್ಟಿದ ತಳಿಗಳನ್ನು ಮಿಶ್ರತಳಿಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಮೊಟ್ಟೆತಳಿ, ಮಾಂಸದ ತಳಿ ಮತ್ತು ವಿವಿಧ ಉದ್ದೇಶದ ತಳಿಗಳೆಂದು ಮೂರು ಬಗೆ. ಇವು ಬೇಗ ಬೆಳೆಯುತ್ತವೆ. ಆದ್ದರಿಂದ ಸಾಕುವವನಿಗೆ ಹೆಚ್ಚು ಲಾಭ ದೊರಕುತ್ತದೆ. ಮಾಂಸದ ತಳಿಯ ಮರಿಗಳು ಏಳು-ಎಂಟು ವಾರದಲ್ಲಿ ಒಂದೂವರೆ ಕೆ.ಜಿ.ಯಿಂದ ಎರಡುಕೆ.ಜಿ. ಯಷ್ಟು ತೂಕ ಪಡೆಯುತ್ತವೆ. ಮೊಟ್ಟೆ ತಳಿಯೂ ಕೂಡ ವಿದೇಶಿ ತಳಿಯಂತೆ ಹೆಚ್ಚು ಮೊಟ್ಟೆಗಳನ್ನು ನೀಡುತ್ತದೆ. ಮಾಂಸದ ತಳಿಗಳಲ್ಲಿ ಬ್ರಾಯಿಲರ್ ಮತ್ತು ಗಿರಿರಾಜ ತಳಿಗಳು ಮುಖ್ಯವಾದುವು. ಕೋಳಿ ಸಾಕಣಿಕೆಯನ್ನು ಲಾಭದಾಯಕವನ್ನಾಗಿ ಮಾಡುವ ಸಾಕಣೆದಾರನು ಉತ್ತಮ ಸಂಕರತಳಿಯ ಮರಿಗಳನ್ನು ಆರಿಸಿಕೊಂಡು ಸಾಕುತ್ತಾನೆ.

## ಕೋಳಿ ಗೂಡು

ಆಧುನಿಕ ರೀತಿಯ ಕೋಳಿಸಾಕಾಣಿಕೆಯಲ್ಲಿ ಗೂಡುಗಳಿಗೆ ಹೆಚ್ಚು ಗಮನ ಕೊಡುತ್ತಾರೆ. ಏಕೆಂದರೆ ಉತ್ತಮ ಗೂಡುಗಳಿಂದ ಕೋಳಿಗಳ ಬೆಳವಣಿಗೆ ಮತ್ತು ಅಧಿಕ ಮೊಟ್ಟೆ ಉತ್ಪಾದನೆ ಸಾಧ್ಯವಾಗುತ್ತದೆ. ಆದ್ದರಿಂದ ಕೋಳಿ ಗೂಡುಗಳು ಕೆಲವು ಅವಶ್ಯಕ ಗುಣಗಳನ್ನು ಹೊಂದಿರಬೇಕಾಗುತ್ತದೆ. ಕೋಳಿಗೂಡನ್ನು ಎತ್ತರದ ಸ್ಥಳದಲ್ಲಿ ಕಟ್ಟಬೇಕು. ಗೂಡುಗಳು ಆದಷ್ಟು ವಿಶಾಲವಾಗಿರಬೇಕು. ಗಾಳಿಬೆಳಕು ಚೆನ್ನಾಗಿ ಬರುವಂತಿರಬೇಕು. ಶತ್ರುಬಾಧೆ ಮತ್ತು ಕಳ್ಳಕಾಕರ ಭೀತಿಯಿರಬಾರದು. ಮಳೆ ಮತ್ತು ಬಿಸಿಲಿನಿಂದ ರಕ್ಷಣೆಯಿರಬೇಕು. ಕೋಳಿಗೂಡು ಬಸ್ಸು ಮತ್ತು ರೈಲು ನಿಲ್ದಾಣಗಳಿಗೆ ಹತ್ತಿರವಿರಬೇಕು. ಅದರಿಂದ ಬೇಕಾದ ವಸ್ತುಗಳನ್ನು ತರಿಸಲು ಮತ್ತು ಸಾಗಿಸಲು ಅನುಕೂಲವಾಗುತ್ತದೆ. ಆದರೆ ಕೋಳಿಗೂಡುಗಳು ವಾಸದ ಮನೆಗೆ ತೀರ ಹತ್ತಿರವಿರಬಾರದು. ಹತ್ತಿರವಿದ್ದರೆ ವಾಸನೆ ಮತ್ತು ರೋಗ ತಗುಲುವ ಸಾಧ್ಯತೆಯಿರುತ್ತದೆ.

ಕೋಳಿ ಗೂಡುಗಳಲ್ಲಿ ವಿವಿಧ ಮಾದರಿಗಳಿವೆ. ಕೋಳಿಗೂಡುಗಳನ್ನು ಪೂರ್ವ ಪಶ್ಚಿಮವಾಗಿ ಕಟ್ಟಬೇಕು. ಹೀಗೆ ಕಟ್ಟುವುದರಿಂದ ಮಳೆ ಮತ್ತು ಬಿಸಿಲಿನಿಂದ ರಕ್ಷಣೆ ದೊರಕುತ್ತದೆ. ಕೋಳಿ ಗೂಡುಗಳು ಸಾಮಾನ್ಯವಾಗಿ ಮೂವತ್ತು ಅಡಿ ಅಗಲವಿರುತ್ತವೆ. ಸಾಕುವ ಕೋಳಿಗಳ ಸಂಖ್ಯೆಗೆ ಅನುಗುಣವಾಗಿ ಎಷ್ಟು ಉದ್ದ ಬೇಕಾದರೂ ಇರಬಹುದು. ಛಾವಣಿಗೆ

ಹೆಂಚು ಮತ್ತು ತೆಂಗಿನಗರಿ ಮೊದಲಾದುವನ್ನು ಬಳಸುತ್ತಾರೆ. ಕೋಳಿಮನೆಗಳಿಗೆ ನೀರು ಮತ್ತು ವಿದ್ಯುಚ್ಛಕ್ತಿಯ ಸೌಲಭ್ಯವಿರಬೇಕು.

ಸುಸಜ್ಜಿತ ಕೋಳಿಗೂಡಿನಲ್ಲಿ ಹಲವು ವಿಭಾಗಗಳಿರುತ್ತವೆ. ಅವುಗಳಲ್ಲಿ ಮರಿಗಳನ್ನು ಸಾಕುವ ಗೂಡು, ಮೊಟ್ಟೆಯಿಡುವ ಕೋಳಿಗಳ ಗೂಡು, ತಳಿ ಸಂರಕ್ಷಣಾ ಗೂಡು, ಮಾಂಸದ ಕೋಳಿ ಗೂಡುಗಳೆಂದು ಹಲವು ವಿಧಗಳಿವೆ. ಇಂತಹ ಕೋಳಿ ಗೂಡುಗಳು ಕೆಲವು ಉಪಕರಣಗಳನ್ನು ಹೊಂದಿರಬೇಕಾಗುತ್ತದೆ. ಅವುಗಳಲ್ಲಿ ಬಿಸಿಬುಟ್ಟಿ, ಕಾವು ಪೆಟ್ಟಿಗೆ, ನೀರು ಪಾತ್ರೆ, ಆಹಾರ ಪಾತ್ರೆ, ಹಾಸು ಏಣಿ ಮೊದಲಾದುವು ಮುಖ್ಯವಾದುವು.

## ಬಿಸಿಬುಟ್ಟಿ

ಮಾರುಕಟ್ಟೆಯಲ್ಲಿ ಬಿಸಿಬುಟ್ಟಿಯ ಅನೇಕ ಮಾದರಿಗಳು ದೊರಕುತ್ತವೆ. ಇವು ಬಹಳ ದುಬಾರಿ. ಇಂತಹ ಬುಟ್ಟಿಗಳನ್ನು ಸ್ವತಃ ಮಾಡಿಕೊಳ್ಳಬಹುದು. ನಾಲ್ಕು ಅಡಿ ಅಗಲದ ಬಿದಿರಿನ ಬುಟ್ಟಿಯನ್ನು ತೆಗೆದುಕೊಂಡು ಅದಕ್ಕೆ ವಿದ್ಯುದ್ದೀಪಗಳನ್ನು ಅಳವಡಿಸಬೇಕು. ಗಾಳಿಯಾಡುವಂತೆ ಒಂಬತ್ತು ಅಂಗುಲ ಎತ್ತರದ ಕಾಲುಗಳನ್ನು ಜೋಡಿಸಬೇಕು. ಇಂತಹ ಒಂದೊಂದು ಬುಟ್ಟಿಗಳಲ್ಲಿ ನೂರೈವತ್ತರಿಂದ ಇನ್ನೂರು ಮರಿಗಳನ್ನು ಸಾಕಬಹುದು.

## ಕಾವು ಯಂತ್ರ

ಹಳೆಯ ಪದ್ಧತಿಯಲ್ಲಿ ಕೋಳಿಗಳನ್ನು ಕಾವು ಕೂರಿಸಿ ಮೊಟ್ಟೆಗಳಿಂದ ಮರಿಗಳನ್ನು ಮಾಡುವುದು ರೂಢಿ. ಆಧುನಿಕ ಕೋಳಿಸಾಕಣೆಯಲ್ಲಿ ಕೃತಕ ಶಾಖ ಬಳಸಿ ಮೊಟ್ಟೆಗಳಿಂದ ಮರಿ ಮಾಡಿಸುತ್ತಾರೆ. ಹಳೆಯ ಪದ್ಧತಿಯಲ್ಲಿ ಶೇಕಡಾ ೩೦ರಷ್ಟು ಮೊಟ್ಟೆಗಳು ಮರಿಗಳಾಗುವುದಿಲ್ಲ. ಇದರಿಂದ ಹೆಚ್ಚು ನಷ್ಟವಾಗುತ್ತದೆ. ಅದಕ್ಕಾಗಿ ಇತ್ತೀಚೆಗೆ ಕೃತಕ ಕಾವು ವ್ಯವಸ್ಥೆಯನ್ನು ವಿಶೇಷವಾಗಿ ಬಳಸುತ್ತಾರೆ. ಇದಕ್ಕಾಗಿ ಅಲಮಾರು ಮಾದರಿಯ ಕಾವು ಯಂತ್ರಗಳನ್ನು ಬಳಸುತ್ತಾರೆ.











ನೀರು ಪಾತ್ರೆಗಳ ವಿವಿಧ ಮಾದರಿಗಳು

## ನೀರು ಪಾತ್ರೆ

ಕೋಳಿಗಳ ಬೆಳವಣಿಗೆಗೆ ಶುದ್ಧವಾದ ನೀರು ಬಹಳ ಅಗತ್ಯ. ನೀರಿಗಾಗಿ ಕೋಳಿಗೂಡಿನಲ್ಲಿ ಅಲ್ಲಲ್ಲೇ ನೀರುಪಾತ್ರೆಗಳನ್ನು ಇಟ್ಟಿರುತ್ತಾರೆ. ಇವುಗಳನ್ನು ಮಣ್ಣಿನಿಂದ ಅಥವಾ ತಗಡಿನಿಂದಾಗಲಿ ಮಾಡಬಹುದು. ಕೋಳಿಗಳ ವಯಸ್ಸಿಗೆ ಅನುಗುಣವಾಗಿ ನೀರು ಪಾತ್ರೆಗಳ ಆಳತೆಯಿರಬೇಕಾಗುತ್ತದೆ.

## ಆಹಾರ ಪಾತ್ರೆ

ಕೋಳಿಗಳಿಗೆ ನೀಡುವ ಆಹಾರ ವ್ಯರ್ಥವಾಗದಂತೆ ಆಹಾರದ ಪಾತ್ರೆಗಳನ್ನು ಬಳಸಲಾಗುತ್ತದೆ. ಈ ಆಹಾರದ ಪಾತ್ರೆಗಳನ್ನು ಬಿದಿರಿನಿಂದ, ಮರದಿಂದ ಅಥವಾ ತಗಡಿನಿಂದ ಮಾಡಿರುತ್ತಾರೆ. ಕೋಳಿಗಳ ವಯಸ್ಸಿಗೆ ಅನುಗುಣವಾಗಿ ಅನೇಕ ಮಾದರಿಯ ಆಹಾರ ಪಾತ್ರೆಗಳನ್ನು ಬಳಸುತ್ತಾರೆ.

## ಹಾಸುಏಣಿ

ಕೋಳಿಗಳು ವಿರಾಮ ವೇಳೆಯಲ್ಲಿ ಕುಳಿತುಕೊಳ್ಳಲೆಂದು ಹಾಸು ಏಣಿಯನ್ನು ಬಳಸುತ್ತಾರೆ. ಇದನ್ನು ಮರದಿಂದ ಅಥವಾ ಬಿದಿರಿನಿಂದ ತಯಾರಿಸಬಹುದು. ಇದು ನೋಡಲು ಚಿಕ್ಕ ಮಂಚದ ಆಕಾರದಲ್ಲಿರುತ್ತದೆ.

## ಅಡ್ಡಕಂಬಿ

ಕೋಳಿಗಳು ವಿಶ್ರಾಂತಿಯನ್ನು ಪಡೆಯಲೆಂದು ಇದನ್ನು ಬಳಸುತ್ತಾರೆ. ಇದರಿಂದ ಕೋಳಿಗಳು ನೆಲದ ಮೇಲೆ ಗುಂಪಾಗಿ ಸೇರುವುದು ತಪ್ಪುತ್ತದೆ. ಇದಕ್ಕೆ ಕೊಳವೆ ಅಥವಾ ಕಂಬಿಯನ್ನು ಬಳಸಬಹುದು.

ಹೀಗೆ ಕೋಳಿಗೂಡಿನಲ್ಲಿ ಕೋಳಿಗಳನ್ನು ಸುರಕ್ಷಿತವಾಗಿ ಸಾಕಲು ಇಂತಹ ಹಲವು ಉಪಕರಣಗಳು ಬೇಕಾಗುತ್ತವೆ. ಈ ಬಗೆಯ ಉಪಕರಣಗಳನ್ನು ಬಳಸಿ ಕೋಳಿಗಳನ್ನು ಆಧುನಿಕ ರೀತಿಯಲ್ಲಿ ಸಾಕುತ್ತಾರೆ.









ಆಹಾರ ಪಾತ್ರೆಗಳ ವಿವಿಧ ಮಾದರಿಗಳು

## ಕೋಳಿಗಳ ಆಹಾರ

ಕೋಳಿಗಳ ಶೀಘ್ರ ಬೆಳವಣಿಗೆಗೆ ಪುಷ್ಟಿಕರವಾದ ಆಹಾರವನ್ನು ಒದಗಿಸಬೇಕು. ಅದು ಸಮತೋಲ ಆಹಾರವಾಗಿರಬೇಕು. ಅಧಿಕ ಉತ್ಪಾದನೆಯೇ ಆಧುನಿಕ ಕೋಳಿ ಸಾಕಣೆಯ ಉದ್ದೇಶ. ಈ ಉದ್ದೇಶದ ಸಾಧನೆಗಾಗಿ ಕೋಳಿಗಳಿಗೆ ಸಮತೋಲ ಆಹಾರವನ್ನು ನೀಡಬೇಕು. ಇಂದು ಕೋಳಿಗಳ ಆಹಾರದ ಬೆಲೆ ತುಂಬಾ ದುಬಾರಿಯಾಗಿದೆ. ಕೋಳಿ ಸಾಕಣೆಯ ವೆಚ್ಚದಲ್ಲಿ ಹೆಚ್ಚಿನ ಭಾಗ ಆಹಾರಕ್ಕೆ ಖರ್ಚಾಗುತ್ತದೆ. ಆದ್ದರಿಂದ ಕೋಳಿ ಸಾಕಣೆ ಮಾಡುವವರು ಪೌಷ್ಟಿಕಾಂಶದಿಂದ ಕೂಡಿರುವ ಆಹಾರದ ಬಗ್ಗೆ ತಿಳುವಳಿಕೆ ಹೊಂದಿರಬೇಕು.

ಕೋಳಿಗಳ ಆರೋಗ್ಯಕರ ಬೆಳವಣಿಗೆಗೆ ನೀರು, ಒಳ್ಳೆಯ ಆಹಾರದ ಅವಶ್ಯಕತೆಯಿದೆ. ಇಂತಹ ಆಹಾರವನ್ನು ಕಾಲಕಾಲಕ್ಕೆ ಒದಗಿಸುವುದರ ಮೂಲಕ ಕೋಳಿಗಳಿಂದ ಹೆಚ್ಚು ಮೊಟ್ಟೆಗಳನ್ನು ಮತ್ತು ಮಾಂಸವನ್ನು ಪಡೆಯಲು ಸಾಧ್ಯವಾಗುತ್ತದೆ.



## ನೀರು

ಕೋಳಿಗಳು ಒಂದು ಗ್ರಾಂ ತೂಕದ ಆಹಾರವನ್ನು ತಿಂದರೆ, ಎರಡು ಗ್ರಾಂ ತೂಕದ ನೀರನ್ನು ಕುಡಿಯುತ್ತವೆ. ನೀರು, ಕೋಳಿಗಳ ಬಹು ಮುಖ್ಯವಾದ ಆಹಾರ. ತಿಂದ ಆಹಾರವನ್ನು ಅರಗಿಸಲು ನೀರು ಅಗತ್ಯ. ಆಹಾರವನ್ನು ಜೀವಶಕ್ತಿಯಾಗಿ ಪರಿವರ್ತಿಸುವಲ್ಲಿ ನೀರಿನ ಪಾತ್ರ ಬಹುಮುಖ್ಯವಾದುದು. ಕೋಳಿಗಳಿಗೆ ಸದಾಕಾಲ ಶುದ್ಧವಾದ ನೀರನ್ನು ಒದಗಿಸಬೇಕು. ಇದರಿಂದ ಅಧಿಕ ಉತ್ಪಾದನೆ ಪಡೆಯಲು ಸಾಧ್ಯವಾಗುತ್ತದೆ.

## ಶರ್ಕರಪಿಷ್ಟಗಳು

ಶರೀರಕ್ಕೆ ಬೇಕಾದ ಶಕ್ತಿಯನ್ನು ಶರ್ಕರಪಿಷ್ಟಗಳು ನೀಡುತ್ತವೆ. ಆದ್ದರಿಂದ ಶರ್ಕರ ಪಿಷ್ಟಗಳು ಅಧಿಕವಾಗಿರುವ ಆಹಾರವನ್ನು ಕೋಳಿಗಳಿಗೆ ಒದಗಿಸಬೇಕು. ಮುಸುಕಿನ ಜೋಳ, ಅಕ್ಕಿತೌಡು, ಗೋಧಿ ತೌಡು ಮತ್ತು ಬೆಲ್ಲದ ಮಡ್ಡಿ ಮೊದಲಾದವುಗಳು ಶರ್ಕರ ಪಿಷ್ಟದಿಂದ ಕೂಡಿರುವ ಆಹಾರಗಳು.

## ಕೊಬ್ಬು

ಕೋಳಿಗಳ ಆಹಾರದಲ್ಲಿ ಕೊಬ್ಬಿನ ಅಂಶವಿರಬೇಕು. ಪ್ರತಿಯೊಂದು ಪ್ರಾಣಿಗಳ ಬೆಳವಣಿಗೆಯಲ್ಲಿ ಕೊಬ್ಬಿನ ಪಾತ್ರ ಬಹು ಮುಖ್ಯವಾದುದು. ಕೊಬ್ಬನ್ನು ಶಕ್ತಿಯ ಭಂಡಾರವೆಂದು ಭಾವಿಸಲಾಗಿದೆ. ಆದ್ದರಿಂದ ಹಂದಿಯಕೊಬ್ಬು, ಪ್ರಾಣಿಯ ಚರಬಿಯನ್ನು ಕೋಳಿಯ ಆಹಾರದಲ್ಲಿ ಸೇರಿಸಿಕೊಡುವುದರಿಂದ ಕೋಳಿಗಳು ಚೆನ್ನಾಗಿ ಬೆಳೆಯುತ್ತವೆ. ಇದರಿಂದ ಅಧಿಕ ಉತ್ಪಾದನೆಯನ್ನು ಪಡೆಯಲು ಸಾಧ್ಯವಾಗುತ್ತದೆ.

## ಸಸಾರಜನಕಗಳು

ಸಸಾರಜನಕಗಳು ಶರೀರದ ಬೆಳವಣಿಗೆಗೆ ಮತ್ತು ಮೊಟ್ಟೆಗಳ ಉತ್ಪಾದನೆಗೆ ಅಗತ್ಯವಾಗಿ ಬೇಕು. ಸಸಾರಜನಕದಿಂದ ಕೂಡಿದ ಆಹಾರವನ್ನು ಕೋಳಿಗಳಿಗೆ ಒದಗಿಸಿದಲ್ಲಿ ಬೆಳವಣಿಗೆ ಶೀಘ್ರವಾಗಿ ಆಗುತ್ತದೆ. ಸಸಾರಜನಕಗಳಲ್ಲಿ ಸಸ್ಯಮೂಲ ಸಸಾರಜನಕಗಳು ಮತ್ತು ಪ್ರಾಣಿಮೂಲ ಸಸಾರಜನಕಗಳೆಂದು ಎರಡು ಬಗೆಗಳಿವೆ. ಮೀನಿನ ಪುಡಿ, ಮಾಂಸದ ಪುಡಿ, ರಕ್ತದಪುಡಿ ಮತ್ತು ನೆಲಗಡಲೆ ಹಿಂಡಿ, ಕೊಬ್ಬರಿ ಹಿಂಡಿ, ಎಳ್ಳಿನ ಹಿಂಡಿ ಮೊದಲಾದುವುಗಳಲ್ಲಿ ಸಸಾರಜನಕಗಳು ದೊರಕುತ್ತವೆ. ಇಂತಹ ಸಸಾರಜನಕದಿಂದ ಕೂಡಿರುವ ಆಹಾರವನ್ನು ಕೊಡುವುದರಿಂದ ಅಧಿಕ ಲಾಭವನ್ನು ನಿರೀಕ್ಷಿಸಬಹುದು.

## ಜೀವಸತ್ವಗಳು

ಶರೀರದ ಆರೋಗ್ಯಕ್ಕೆ ಮತ್ತು ಬೆಳವಣಿಗೆಗೆ ಜೀವಸತ್ವಗಳು ಅಗತ್ಯವಾಗಿ ಬೇಕು. ಕೋಳಿಗಳಿಗೆ ಈ ಜೀವಸತ್ವಗಳನ್ನು ಆಹಾರದ ಮೂಲಕ ಒದಗಿಸಬೇಕು. ಹಸಿರುಸೊಪ್ಪು ಒಳ್ಳೆಯ ಜೀವಸತ್ವ ಆಹಾರ. ನೆಲಗಡಲೆ ಗಿಡ, ಮೊದಲಾದವು ಜೀವಸತ್ವದಿಂದ ಕೂಡಿದ ಹಸಿರು ಮೇವುಗಳು. ಇವುಗಳನ್ನು ಕೋಳಿಗಳ ಆಹಾರದಲ್ಲಿ ಬೆರಸಿ ಕೊಡುವುದರಿಂದ ಚೆನ್ನಾಗಿ ಬೆಳವಣಿಗೆ ಹೊಂದುತ್ತವೆ.

## ಖನಿಜಾಂಶಗಳು

ಖನಿಜಾಂಶಗಳಿಂದ ಕೂಡಿದ ಆಹಾರ ಕೋಳಿಗಳ ಬೆಳವಣಿಗೆಯಲ್ಲಿ ಪ್ರಮುಖಪಾತ್ರವಹಿಸುತ್ತದೆ. ಏಕೆಂದರೆ ಕೋಳಿಗಳ ಮೂಳೆಯ ಬೆಳವಣಿಗೆ, ರಕ್ತದ ಉತ್ಪಾದನೆ ಮತ್ತು ಮೊಟ್ಟೆಯ ಚಿಪ್ಪಿನ ಬೆಳವಣಿಗೆಗೆ ಖನಿಜಾಂಶಗಳಿಂದ ಕೂಡಿದ ಆಹಾರ ಅಗತ್ಯ. ಕ್ಯಾಲ್ಸಿಯಂ, ರಂಜಕ, ಕಬ್ಬಿಣ ಮೊದಲಾದ ಖನಿಜಾಂಶಗಳು ಆಹಾರದಲ್ಲಿ ದೊರೆಯುವಂತಿರಬೇಕು. ಸುಣ್ಣದಕಲ್ಲು, ಮೊಟ್ಟೆ ಚಿಪ್ಪಿನ ಪುಡಿ, ಮೂಳೆಪುಡಿ, ಅಡಿಗೆ ಉಪ್ಪು ಮೊದಲಾದುವುಗಳಲ್ಲಿ ಖನಿಜಾಂಶಗಳು ದೊರಕುತ್ತವೆ. ಇವುಗಳನ್ನು ಆಹಾರದಲ್ಲಿ ಬೆರೆಸಿ ಕೊಡಬಹುದು.

ಉತ್ತಮ ಕೋಳಿ ಆಹಾರ ಈ ಎಲ್ಲ ಅಂಶಗಳನ್ನು ಒಳಗೊಂಡಿರಬೇಕು. ಇಂತಹ ಪುಷ್ಟಿಕರ ಆಹಾರವನ್ನು ಕೋಳಿಗಳಿಗೆ ಒದಗಿಸುವುದರಿಂದ ಕೋಳಿಗಳು ಚೆನ್ನಾಗಿ ಬೆಳವಣಿಗೆ ಹೊಂದುತ್ತವೆ. ಹೀಗೆ ಆರೋಗ್ಯಕರವಾಗಿ ಬೆಳೆದ ಕೋಳಿಗಳಿಂದ ಮೊಟ್ಟೆಗಳ ಉತ್ಪಾದನೆಯಲ್ಲಿ ಹೆಚ್ಚಳವನ್ನು ಮತ್ತು ಅಧಿಕ ಮಾಂಸವನ್ನು ಪಡೆಯಬಹುದು. ಇದರಿಂದ ಕೋಳಿಸಾಕಣೆ ಲಾಭದಾಯಕವಾಗಿ ಪರಿಣಮಿಸುತ್ತದೆ.

# ಆಧುನಿಕ ವಿಧಾನದಲ್ಲಿ ಮರಿಮಾಡಿಸುವಿಕೆ

ಕೋಳಿಸಾಕಣೆಯಲ್ಲಿ ಮೊಟ್ಟೆಗಳಿಂದ ಮರಿಮಾಡಿಸುವಿಕೆ ಬಹು ಮುಖ್ಯವಾದ ಕ್ರಿಯೆ. ಹೀಗೆ ಮರಿಮಾಡಿಸುವಿಕೆಯಲ್ಲಿ ಸಹಜ ಪದ್ಧತಿ ಮತ್ತು ಕೃತಕ ಕಾವು ಪದ್ಧತಿಯೆಂದು ಎರಡು ವಿಧಾನಗಳಿವೆ. ಕೋಳಿಯು ಇಪ್ಪತ್ತೊಂದು ದಿನಗಳ ಕಾಲ ಮೊಟ್ಟೆಯ ಮೇಲೆ ಕಾವು ಕುಳಿತು ಮರಿಮಾಡಿಸುವ ವಿಧಾನವನ್ನು ಸಹಜ ಪದ್ಧತಿಯೆಂದು ಕರೆಯುತ್ತಾರೆ. ಸಹಜ ಪದ್ಧತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮರಿಗಳನ್ನು ಮಾಡಿಸಲಾಗುವುದಿಲ್ಲ. ಹೆಚ್ಚಿನ ಸಂಖ್ಯೆಯ ಮರಿಗಳ ಅಗತ್ಯವನ್ನು ಪೂರೈಸಬೇಕಾದರೆ ನಾವು ಆಧುನಿಕ ವಿಧಾನವನ್ನು ಅನುಸರಿಸಬೇಕಾಗುತ್ತದೆ. ಆಧುನಿಕ ರೀತಿಯ ಕೋಳಿ ಸಾಕಣೆಯಲ್ಲಿ ಕೃತಕಕಾವು ಪದ್ಧತಿಯಿಂದ ಮರಿಮಾಡಿಸುತ್ತಾರೆ. ಕೃತಕ ಕಾವುಯಂತ್ರದಿಂದ (ಇಂಕುಬೇಟರ್ಸ್) ನೂರಾರು ಮೊಟ್ಟೆಗಳನ್ನು ಒಂದೇ ಬಾರಿ ಇಟ್ಟು ಮರಿಮಾಡಿಸಬಹುದು. ಈ ವಿಧಾನದಿಂದ ನಮಗೆ ಬೇಕಾದಷ್ಟು ಮರಿಗಳನ್ನು ಬೇಕಾದಾಗ ಪಡೆಯಬಹುದಾಗಿದೆ.




ಅಲಮಾರು ಮಾದರಿಯ ಕಾವುಯಂತ್ರ

ಹೀಗೆ ಮರಿಮಾಡಿಸುವಾಗ ಮೊಟ್ಟೆಗಳ ಆಯ್ಕೆಯಲ್ಲಿ ತುಂಬಾ ಎಚ್ಚರಿಕೆ ವಹಿಸಬೇಕು. ಇದಕ್ಕೆ ಫಲವತ್ತಾದ ಮತ್ತು ರೋಗಮುಕ್ತವಾದ ಮೊಟ್ಟೆಗಳನ್ನು ಆರಿಸಿಕೊಳ್ಳಬೇಕು. ಆಯ್ಕೆ ಮಾಡುವಾಗ ಮೊಟ್ಟೆಗಳ ಗಾತ್ರ, ಆಕಾರ ಮತ್ತು ಮೊಟ್ಟೆಯ ಚಿಪ್ಪಿನ ಗುಣಮಟ್ಟವನ್ನು ಗಮನಿಸಬೇಕು. ಮರಿಮಾಡಿಸಲು ರೋಗಮುಕ್ತವಾದ, ಮಧ್ಯಮ ಗಾತ್ರದ ಮೊಟ್ಟೆಗಳನ್ನು ಆರಿಸಿಕೊಳ್ಳಬೇಕು. ಮೊಟ್ಟೆಗಳು ಸರಿಯಾದ ಆಕಾರದವಾಗಿದ್ದು ಉತ್ತಮ ಗುಣಮಟ್ಟದ ಚಿಪ್ಪಿನಿಂದ ಕೂಡಿರಬೇಕು. ಇಂತಹ ಮೊಟ್ಟೆಗಳನ್ನು ಮಾತ್ರ ಮರಿ ಮಾಡಿಸಲು ಆರಿಸಿಕೊಳ್ಳಬೇಕು. ಮೊಟ್ಟೆಗಳು ದೋಷದಿಂದ ಕೂಡಿದ್ದರೆ ಮರಿಗಳಾಗುವುದಿಲ್ಲ. ಆದ್ದರಿಂದ ಮರಿ ಮಾಡಿಸಲು ಆರಿಸುವ ಮೊಟ್ಟೆಗಳ ವಿಚಾರದಲ್ಲಿ ತುಂಬಾ ಎಚ್ಚರಿಕೆ ವಹಿಸಬೇಕು.

ಹೀಗೆ ಆರಿಸಿದ ಮೊಟ್ಟೆಗಳನ್ನು ಕಾವು ಯಂತ್ರದಲ್ಲಿಟ್ಟು ಇಪ್ಪತ್ತೊಂದು ದಿನಗಳ ಕಾಲ ಕಾವು ಕೊಟ್ಟು ಮರಿಮಾಡಿಸುತ್ತಾರೆ. ಕೃತಕ ಕಾವು ಪದ್ಧತಿಯಿಂದ ಮರಿಮಾಡಿಸಲು ಅಲಮಾರು ಮಾದರಿಯ ಕಾವು ಯಂತ್ರವನ್ನು ಬಳಸುತ್ತಾರೆ. ಈ ಯಂತ್ರಗಳು ವಿದ್ಯುತ್ತಿನ ಸಹಾಯದಿಂದ ಕಾವು ಒದಗಿಸುತ್ತವೆ. ಸರಿಯಾದ ಪ್ರಮಾಣದಲ್ಲಿ ಶಾಖವನ್ನು ಹಾಯಿಸುವುದರಿಂದ ಮರಿ ಮಾಡಿಸುವಿಕೆಯಲ್ಲಿ ಉತ್ತಮ ಫಲಿತಾಂಶವನ್ನು ಪಡೆಯಬಹುದು. ಕಾವು ಯಂತ್ರದ ಸರಿಯಾದ ನಿರ್ವಹಣೆಯಿಂದ ಮರಿಮಾಡಿಸುವಿಕೆಯಲ್ಲಾಗುವ ನಷ್ಟವನ್ನು ತಡೆಗಟ್ಟಬಹುದು. ಸಹಜಪದ್ಧತಿಯಲ್ಲಿ ಒಂದು ಕೋಳಿ ಒಂದು ಬಾರಿಗೆ ಕೇವಲ ಹತ್ತರಿಂದ ಹದಿನೈದು ಮರಿಗಳನ್ನು ಮಾಡುತ್ತದೆ. ಅದರಲ್ಲಿ ಎಷ್ಟೋ ಮೊಟ್ಟೆಗಳು ಹಾಳಾಗುತ್ತವೆ. ಆದರೆ ಕೃತಕ ಕಾವು ಯಂತ್ರದಿಂದ ನಮ್ಮ ಅವಶ್ಯಕತೆಗೆ ತಕ್ಕಂತೆ ನೂರಾರು ಮರಿಗಳನ್ನು ಪಡೆಯಬಹುದು. ಹೀಗೆ ಕೃತಕ ಪದ್ಧತಿಯ ಮರಿಮಾಡಿಸುವಿಕೆ ವಿಧಾನ ಕೋಳಿಸಾಕಣೆಯ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಗೆ ಕಾರಣವಾಗಿದೆ.

## ಆಧುನಿಕ ವಿಧಾನದಲ್ಲಿ ಮರಿಸಾಕಣೆ

ಮೊಟ್ಟೆಗಳಿಂದ ಆಗ ತಾನೇ ಹೊರಬಂದ ಮರಿಗಳನ್ನು ತಾಯಿ ಕೋಳಿ ರೆಕ್ಕೆಗಳ ಅಡಿಯಲ್ಲಿಟ್ಟುಕೊಂಡು ಕಾವು ಕೊಟ್ಟು ಸಾಕುತ್ತದೆ. ಈ ವಿಧಾನ ಲಾಭದಾಯಕವಲ್ಲ. ಆದ್ದರಿಂದ ಆಧುನಿಕ ಕೋಳಿ ಸಾಕಣೆಯಲ್ಲಿ ಮರಿಗಳನ್ನು ಬೆಳೆಸಲು ಕೃತಕ ಕಾವು ಪೆಟ್ಟಿಗೆ (ಬ್ರೂಡರ್) ವಿಧಾನವನ್ನು ಅನುಸರಿಸುತ್ತಾರೆ. ಈ ವಿಧಾನದಲ್ಲಿ ಒಂದೇ ಸಲಕ್ಕೆ ನೂರಾರು ಮರಿಗಳನ್ನು

ಸಾಕಬಹುದು. ಅಲ್ಲದೆ ವರ್ಷದ ಎಲ್ಲಾ ಕಾಲದಲ್ಲೂ ಮರಿಗಳನ್ನು ಉತ್ಪಾದಿಸಬಹುದು. ಆದ್ದರಿಂದ ಕೋಳಿಸಾಕಣೆಯಲ್ಲಿ ಕಾವು ಪೆಟ್ಟಿಗೆ ಪದ್ಧತಿ ಲಾಭದಾಯಕವಾಗಿ ಪರಿಣಮಿಸಿದೆ.



ವಿದ್ಯುತ್ ಬ್ರೂಡರ್ (ಕಾವುಪಟ್ಟಿ)

ಕೃತಕ ಕಾವು ಪೆಟ್ಟಿಗೆಗಳು ಮರಿಗಳ ಸಾಕಣೆಯಲ್ಲಿ ಬಹುಮುಖ್ಯ ಪಾತ್ರವಹಿಸುತ್ತವೆ. ಈ ಕಾವು ಪೆಟ್ಟಿಗೆಗಳಲ್ಲಿ ಮೂರು ನಾಲ್ಕು ಬಗೆಗಳಿವೆ. ಅದರಲ್ಲಿ ವಿದ್ಯುತ್ ಶಾಖ ಹಾವರಿನ ಮಾದರಿ ಮತ್ತು ಬಿಸಿಬುಟ್ಟಿ ಮಾದರಿಗಳು ಹೆಚ್ಚು ಬಳಕೆಯಲ್ಲಿವೆ. ಕೋಳಿಮರಿಗಳನ್ನು ಕಾವು ಪೆಟ್ಟಿಗೆಯಲ್ಲಿ ಸಾಕುವವರು ಕಾಲಕಾಲಕ್ಕೆ ಆಹಾರ ಮತ್ತು ನೀರನ್ನು ಒದಗಿಸಬೇಕು. ಅದಕ್ಕಾಗಿ ಆಹಾರದ ಪಾತ್ರೆಗಳನ್ನು ಮತ್ತು ನೀರಿನ ಪಾತ್ರೆಗಳನ್ನು ಕಾವು ಪೆಟ್ಟಿಗೆ ಅಂಚಿನಲ್ಲಿ ಮರಿಗಳಿಗೆ ಸಿಕ್ಕುವಂತೆ ಇಟ್ಟಿರಬೇಕು. ಕಾವು ಪೆಟ್ಟಿಗೆಯಲ್ಲಿ ಮರಿಗಳನ್ನು ಬಿಟ್ಟಾಗ ಅವುಗಳನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಮೊದಲ ದಿನಗಳಲ್ಲಿ ಅವುಗಳ ಸಾಕಣೆಗೆ ವಿಶೇಷ ಗಮನ




. ಕಾವುಕೊಡಲು ಬಳಸುವ ವಿಧಾನಗಳು

ಹರಿಸಿದಲ್ಲಿ ಅವು ಮುಂದೆ ಆರೋಗ್ಯಕರವಾಗಿ ಬೆಳೆದು ಉತ್ತಮ ಲಾಭವನ್ನು ತರುತ್ತವೆ. ಈ ದಿನಗಳಲ್ಲಿ ಮರಿಗಳಿಗೆ ಸಮತೋಲ ಆಹಾರವನ್ನು ಕಾಲಕಾಲಕ್ಕೆ ನೀಡಬೇಕು. ಮೊದಲ ದಿನ ಮುಸುಕಿನ ಜೋಳದ ರವೆಯನ್ನು ಅಥವಾ ಮರಿಮೇವನ್ನು ಕಾಗದದ ಮೇಲೆ ಹರಡಬೇಕು. ಬಳಿಕ ಎರಡು-ಮೂರು ವಾರಗಳವರೆಗೆ ಆಹಾರದ ಪಾತ್ರೆಯಲ್ಲಿ ಆಹಾರವನ್ನು ನೀಡಬೇಕು. ನಾಲ್ಕರಿಂದ ಆರು ವಾರಗಳವರೆಗೆ ಬೆಳೆಯುವ ಮೊಟ್ಟೆಕೋಳಿ ಮತ್ತು ಮಾಂಸದ ಕೋಳಿಗಳಿಗೆ ಸಸಾರಜನಕದಿಂದ ಕೂಡಿದ ಶಕ್ತಿಯುತ ಆಹಾರವನ್ನು ಕೊಡಬೇಕು.

ಎಳೆಯ ವಯಸ್ಸಿನ ಮರಿಗಳನ್ನು ಸಾಕುವಾಗ ಅವುಗಳನ್ನು ರೋಗಗಳಿಂದ ರಕ್ಷಿಸಬೇಕು. ಆದ್ದರಿಂದ ಕೆಲವು ಸಾಮಾನ್ಯ ರೋಗಗಳು ಬಾರದಂತೆ ಮುನ್ನೆಚ್ಚರಿಕೆ ಕ್ರಮವಾಗಿ ಲಸಿಕೆಗಳನ್ನು ಹಾಕಬೇಕು. ರೋಗ ನಿರೋಧಕ ಔಷಧಿಗಳನ್ನು ನೀರಿನಲ್ಲಿ ಬೆರೆಸಿ ಕುಡಿಸಬೇಕು. ಮೊಟ್ಟೆಯಿಂದ ಮರಿ ಹೊರಗೆ ಬಂದ ಕೂಡಲೇ ಮೆರೆಕ್ಸ್ ರೋಗ ನಿರೋಧಕ ಲಸಿಕೆ ಕೊಡಬೇಕು. ನಾಲ್ಕು ದಿನದ ಮರಿಗಳಿಗೆ ಕೊಕ್ಕರೆ ರೋಗ ನಿರೋಧಕ ಲಸಿಕೆಯನ್ನು ಕೊಡಬೇಕು. ಮರಿಗಳು ಬೆಳೆದಂತೆಲ್ಲಾ ಆಯಾ ಕಾಲಕ್ಕೆ ತಕ್ಕಂತೆ ರೋಗ ನಿರೋಧಕ ಔಷಧಿಗಳನ್ನು ಮತ್ತು ಚುಚ್ಚುಮದ್ದನ್ನು ಕೊಡುವುದರಿಂದ ಮರಿಗಳು ಆರೋಗ್ಯಕರವಾಗಿ ಬೆಳೆಯಲು ಸಾಧ್ಯವಾಗುತ್ತದೆ.

## ಕೋಳಿರೋಗಗಳು ಮತ್ತು ನಿಯಂತ್ರಣ

ಆಧುನಿಕ ರೀತಿಯ ಕೋಳಿ ಸಾಕಾಣಿಕೆಯ ಮುಖ್ಯ ಉದ್ದೇಶ ಅಧಿಕ ಉತ್ಪಾದನೆ. ವಾಣಿಜ್ಯ ದೃಷ್ಟಿಯಿಂದ ಈ ಉದ್ಯಮಕ್ಕೆ ಕೈಹಾಕಿರುವವರು ಸದಾ ಎಚ್ಚರಿಕೆಯಿಂದಿರಬೇಕು. ಏಕೆಂದರೆ ಕೋಳಿಗಳು ಅನೇಕ ಬಗೆಯ ರೋಗಗಳಿಗೆ ತುತ್ತಾಗಿ ಬಹು ಬೇಗ ಸಾವನ್ನಪ್ಪುತ್ತವೆ. ನಮ್ಮ ದೇಶದಲ್ಲಿ ಪ್ರತಿವರ್ಷ ಶೇಕಡಾ ಐವತ್ತರಷ್ಟು ಕೋಳಿಗಳು ರೋಗರುಜಿನಗಳಿಂದ ಸಾವನ್ನಪ್ಪುತ್ತವೆಂದು ಅಂದಾಜುಮಾಡಿದ್ದಾರೆ. ಅಲ್ಲದೆ ರೋಗಗಳಿಂದ ಕೋಳಿಗಳ ಸಂತಾನಶಕ್ತಿ ಕಡಿಮೆಯಾಗುವುದಲ್ಲದೆ, ರೋಗ ಹೆಚ್ಚಾಗುವುದರಿಂದ ಪ್ರಾಣಹಾನಿಯಾಗಿ ಅಪಾರ ನಷ್ಟವುಂಟಾಗುತ್ತದೆ. ಇದೀಗ ಕೋಳಿಗಳಿಗೆ ತಗುಲುವ ಸಾಂಕ್ರಾಮಿಕ ರೋಗಗಳಿಗೆ ಲಸಿಕೆಗಳನ್ನು, ಔಷಧಿಗಳನ್ನು ಕಂಡು ಹಿಡಿದಿದ್ದಾರೆ. ಅವುಗಳ ಬಳಕೆಯಿಂದ ರೋಗದಿಂದಾಗುವ ಅಪಾರ ಹಾನಿಯನ್ನು ತಡೆಗಟ್ಟಬಹುದು. ಆದ್ದರಿಂದ ಕೋಳಿಸಾಕಣೆ ಮಾಡುವವರು ಈ ಬಗ್ಗೆ ಸೂಕ್ತ ತರಬೇತಿಯನ್ನು ಪಡೆದುಕೊಳ್ಳುವುದು ಅಗತ್ಯ. ವೈಜ್ಞಾನಿಕ ರೀತಿಯಲ್ಲಿ ಕೋಳಿಸಾಕಣೆ ಮಾಡುವುದರಿಂದ, ಮುಂಜಾಗರೂಕತಾ ಕ್ರಮವನ್ನು ಅನುಸರಿಸುವುದರಿಂದ ರೋಗ ಬಾರದಂತೆ ತಡೆಗಟ್ಟಬಹುದು.

ಕೋಳಿಗಳಿಗೆ ಸಾಮಾನ್ಯವಾಗಿ ಬರುವ ರೋಗಗಳನ್ನು; ಸೋಂಕು ರೋಗಗಳು, ಪರೋಪಜೀವಿ ರೋಗಗಳು ಮತ್ತು ಪೌಷ್ಟಿಕಾಂಶಗಳ ಕೊರತೆಯಿಂದ ಬರುವ ರೋಗಗಳೆಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ.

**ಸೋಂಕು ರೋಗಗಳು**



ರಾಣಿ ಖೇತ ಕಾಯಿಲೆ



ಸಿಡುಬು ರೋಗ



ನೆಗಡಿ ಬೇನೆ



ರಕ್ತಭೇದಿ

ಕೋಳಿಗೆ ಬರುವ ವಿವಿಧ ಕಾಯಿಲೆಗಳು

ಸಾಮಾನ್ಯ ಸೋಂಕು ರೋಗಗಳು; ವಿಷಾಣು (ವೈರಸ್)ಗಳು, ಏಕಾಣು ಜೀವಿ(ಬ್ಯಾಕ್ಟೀರಿಯಾ) ಮತ್ತು ಬೂಸ್ಟುಗಳಿಂದ ಬರುತ್ತವೆ. ಇವುಗಳಲ್ಲಿ ಕೊಕ್ಕರೆ ರೋಗ, ಮೆರೆಕ್ಸ್ ರೋಗ, ಕೋಳಿ ಸಿಡುಬು, ಕೋಳಿ ಕಾಲರಾ, ಈಲಿ ಊತ ರೋಗ, ಶ್ವಾಸನಾಳ ಸೋಂಕು, ರಕ್ತಬೇಧಿ, ಪುಲ್ಲೋರಂ ಮುಂತಾದ ರೋಗಗಳಿವೆ. ರೋಗಾಣುಗಳಿಂದ ಹರಡುವ ಈ ರೋಗಗಳು ಸಾಂಕ್ರಾಮಿಕ ರೋಗಗಳಾಗಿವೆ. ಆಹಾರ, ನೀರು ಮತ್ತು ಗಾಳಿಗಳಿಂದ ಇವು ಹರಡುವ ಸಂಭವವೂ ಉಂಟು. ಮೇಲ್ಕಂಡ ರೋಗಗಳಿಗೆ ತುತ್ತಾದ ಕೋಳಿಗಳು ಬದುಕಿ ಉಳಿಯುವುದೇ ಕಷ್ಟ. ಎಷ್ಟೋ ಬಗೆಯ ರೋಗಗಳಿಗೆ ಇನ್ನೂ ಔಷಧಿಯನ್ನು ಕಂಡು ಹಿಡಿಯಲಾಗಿಲ್ಲ. ಆದ್ದರಿಂದ ರೋಗಕ್ಕೆ ತುತ್ತಾದ ಕೋಳಿಗಳನ್ನು ಉಳಿಸಿಕೊಳ್ಳುವುದಕ್ಕಿಂತ ರೋಗಬಾರದಂತೆ ಮುನ್ನೆಚ್ಚರಿಕೆ ವಹಿಸುವುದೇ ಸೂಕ್ತ.

## ಕೊಕ್ಕರೆ ರೋಗ

ಇದನ್ನು ರಾಣಿಖೇತ್ ರೋಗವೆಂದೂ ಕರೆಯುತ್ತಾರೆ. ಇದು ಸೂಕ್ಷ್ಮ ವಿಷಾಣುಗಳಿಂದ ಹರಡುವ ಭಯಂಕರ ಸಾಂಕ್ರಾಮಿಕ ರೋಗ. ಈ ರೋಗದಿಂದ ಮರಿಗಳು ಹಿಂಡು ಹಿಂಡಾಗಿ ಸಾಯುತ್ತವೆ. ಈ ರೋಗಕ್ಕೆ ತುತ್ತಾದ ಕೋಳಿಗಳು ಬಿಳಿಬಣ್ಣದ ಭೇದಿ ಮಾಡಿಕೊಳ್ಳುವುದರಿಂದ ಇದಕ್ಕೆ ಕೊಕ್ಕರೆ ರೋಗವೆಂದು ಹೆಸರು ಬಂದಿದೆ. ಈ ರೋಗಕ್ಕೆ ತುತ್ತಾದ ಕೋಳಿಗಳ ತಲೆ ಜೋತು ಬಿದ್ದು, ರೆಕ್ಕೆ ಮುದುರಿಕೊಂಡು ಜೂಗರಿಸುತ್ತವೆ. ಈ ರೋಗಕ್ಕೆ ಯಾವ ಔಷಧಿಯೂ ಇಲ್ಲ. ಮುಂಜಾಗರೂಕತಾ ಕ್ರಮವಾಗಿ ಮರಿಗಳಿಗೆ 'ಎಫ್' ಲಸಿಕೆಯನ್ನೂ, ದೊಡ್ಡ ಕೋಳಿಗಳಿಗೆ ಆರ್೨ಬಿ ಲಸಿಕೆಯನ್ನು ಹಾಕಿಸುವುದರಿಂದ ಈ ರೋಗಬಾರದಂತೆ ತಡೆಗಟ್ಟಬಹುದು.

## ಕೋಳಿಕಾಲರ

ಇದು ಏಕಾಣು ಜೀವಿಗಳಿಂದ ಹರಡುವ ಒಂದು ರೋಗ. ರೋಗಕ್ಕೆ ತುತ್ತಾದ ಕೋಳಿಗಳು ಹಳದಿ ಅಥವಾ ಹಸಿರು ಬಣ್ಣದ ಭೇದಿ ಮಾಡುತ್ತವೆ. ಅಲ್ಲದೆ ಅತಿಯಾದ ಜ್ವರದಿಂದ ನರಳುತ್ತವೆ. ಆಗ ಸೂಕ್ತ ಔಷಧಿಯನ್ನು ನೀರಿನೊಡನೆ ಬೆರೆಸಿ ಕೊಡುವುದರಿಂದ ರೋಗವನ್ನು ತಡೆಗಟ್ಟಬಹುದು.

## ಕೋಳಿ ಸಿಡುಬು

ಇದು ಸಿಡುಬಿನ ವಿಷಾಣುಗಳಿಂದ ಹರಡುವ ರೋಗ. ಈ ರೋಗ ಮರಿಗಳಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ. ರೋಗ ಕಾಣಿಸಿಕೊಂಡಾಗ ಕೋಳಿಗಳು ರೆಕ್ಕೆ ಮುದುರಿಕೊಂಡು ಕುಳಿತುಕೊಳ್ಳುತ್ತವೆ. ತಲೆ ಮತ್ತು ಕಣ್ಣಿನ ಸುತ್ತ ಬೂದು ಬಣ್ಣದ ಗುಳ್ಳೆಗಳು ಕಾಣಿಸಿಕೊಳ್ಳುತ್ತವೆ. ಅಲ್ಲದೆ ಬಾಯಿ ಮತ್ತು ಗಂಟಲುಗಳಲ್ಲೂ ಗುಳ್ಳೆಗಳು ಕಾಣಿಸಿಕೊಳ್ಳಬಹುದು. ಈ ರೋಗಕ್ಕೂ ಸರಿಯಾದ ಔಷಧಿಯಿಲ್ಲ. ರೋಗ ಬಾರದಂತೆ ಮುನ್ನೆಚ್ಚರಿಕೆಯಾಗಿ ಸೂಕ್ತ ಚುಚ್ಚು ಮದ್ದನ್ನು ಕೊಡಿಸಬಹುದು.

## ಕೋಳಿ ನೆಗಡಿ

ಇದು ಸೂಕ್ಷ್ಮಜೀವಿಗಳಿಂದ ಬರುವ ಸಾಂಕ್ರಾಮಿಕ ರೋಗ. ಈ ರೋಗಕ್ಕೆ ತುತ್ತಾದ ಕೋಳಿಗಳ ಮೂಗಿನಿಂದ ಸದಾ ನೀರು ಸುರಿಯುತ್ತಿರುತ್ತದೆ. ಕಣ್ಣುಗಳು ಊದಿಕೊಂಡು ಬಿಳಿಯ ಅಂಟು ಸುರಿಯುತ್ತಿರುತ್ತದೆ. ಉಸಿರಾಟ ಕಷ್ಟವಾಗುತ್ತದೆ. ಇದನ್ನು ಕೊರೈಜಾ ಎಂದು ಕರೆಯುತ್ತಾರೆ. ಕೋಳಿ ಗೂಡುಗಳ ತೇವಾಂಶದಿಂದ ಈ ರೋಗ ಹರಡುತ್ತದೆ. ಆದ್ದರಿಂದ ಕೋಳಿಗೂಡುಗಳಲ್ಲಿ ತೇವವುಂಟಾಗದಂತೆ ಎಚ್ಚರಿಕೆ ವಹಿಸಬೇಕು.

## ದೀರ್ಘಾವಧಿ ಶ್ವಾಸರೋಗ

ಒಂದು ಬಗೆಯ ರೋಗಾಣುವಿನಿಂದ ಈ ರೋಗ ಬರುತ್ತದೆ. ಈ ರೋಗಕ್ಕೆ ತುತ್ತಾದ ಕೋಳಿಗಳ ಮೂಗಿನಲ್ಲಿ ನೀರು ಸುರಿಯುತ್ತದೆ. ಕೋಳಿಗಳು ಕೆಮ್ಮು, ಸೀನು ಮತ್ತು ಉಸಿರಾಟದ ತೊಂದರೆಯಿಂದ ಸಾಯುತ್ತವೆ. ಮರಿಗಳು ಮತ್ತು ದೊಡ್ಡ ಕೋಳಿಗಳು ಈ ರೋಗಕ್ಕೆ ಬಲಿಯಾಗುತ್ತವೆ. ಆದ್ದರಿಂದ ರೋಗ ಬಾರದಂತೆ ಸೂಕ್ತ ಔಷಧಿಯನ್ನು ಆಹಾರದಲ್ಲಿ ಬೆರೆಸಿ ಕೊಡಬೇಕು ಇಲ್ಲವೆ ನೀರಿನಲ್ಲಿ ಬೆರೆಸಿ ಕುಡಿಸಬೇಕು.

## ಪಾರ್ಶ್ವವಾಯು ರೋಗ

ಈ ರೋಗ ಬಂದಾಗ ಕೋಳಿಯ ಕಣ್ಣುಗಳು ಬೂದು ಬಣ್ಣದ ಪೊರೆಯಿಂದ ಕೂಡಿರುವುದರಿಂದ ಇದನ್ನು ಬೂದು ಕಣ್ಣಿನ ರೋಗವೆಂದೂ ಕರೆಯುತ್ತಾರೆ. ಅತಿ ಸೂಕ್ಷ್ಮಾಣು

ಜೀವಿಯಿಂದ ಬರುವ ಭಯಂಕರ ಸಾಂಕ್ರಾಮಿಕ ರೋಗವಿದು. ಈ ರೋಗಕ್ಕೆ ತುತ್ತಾದ ಕೋಳಿಗಳ ಕಾಲು ಮತ್ತು ರೆಕ್ಕೆಗಳಿಗೆ ಪಾರ್ಶ್ವವಾಯು ಬಡಿದು ಸ್ವಾಧೀನ ತಪ್ಪುತ್ತದೆ. ರೋಗ ನಿರೋಧಕ ಕೋಳಿತಳಿಗಳನ್ನು ಸಾಕುವುದರಿಂದ ಮತ್ತು ಕೋಳಿ ಗೂಡುಗಳಲ್ಲಿ ಹಾಸಿರುವ ಸತ್ತೆ(ಲಿಟ್ಟರ್)ಯನ್ನು ಬದಲಾಯಿಸುವುದರಿಂದ ರೋಗವನ್ನು ತಡೆಗಟ್ಟಬಹುದು. ಮರಿಗಳಿಗೆ ಮೆರೆಕ್ಸ್ ನಿವಾರಕ ಚುಚ್ಚುಮದ್ದು ಹಾಕಿಸಬೇಕು.

## ರಕ್ತಭೇದಿ

ಕೋಳಿಗೂಡಿನಲ್ಲಿ ಈ ರೋಗ ಕಾಣಿಸಿಕೊಂಡರೆ ಕೋಳಿಗಳು ಹಿಂಡು ಹಿಂಡಾಗಿ ಸಾಯುತ್ತವೆ. ಸಾಕಣೆದಾರನಿಗೆ ಇದರಿಂದ ಅಪಾರ ನಷ್ಟವುಂಟಾಗುತ್ತದೆ. ರೋಗಕ್ಕೆ ತುತ್ತಾದ ಕೋಳಿಗಳು ಜೂಗರಿಸುತ್ತಾ ಕುಳಿತು ಕೊಳ್ಳುತ್ತವೆ. ಭೇದಿಯಲ್ಲಿ ರಕ್ತಕಾಣಿಸಿಕೊಳ್ಳುತ್ತದೆ. ಕೂಡಲೇ ವೈದ್ಯರನ್ನು ಕಂಡು ಸೂಕ್ತವಾದ ಔಷಧಿಗಳನ್ನು ಕೊಡಬೇಕು.

## ಕೋಳಿ ಟೈಫಾಯಿಡ್

ಪುಲ್ಲೋರಂ ಎಂಬ ಏಕಾಣು ಜೀವಿಯಿಂದ ಹರಡುವ ಸೋಂಕು ರೋಗವಾದ್ದರಿಂದ, ಇದನ್ನು ಪುಲ್ಲೋರಂ ಎಂದೂ ಕರೆಯುತ್ತಾರೆ. ಇದು ಸಾಮಾನ್ಯವಾಗಿ ಮೊಟ್ಟೆಗಳ ಮೂಲಕ ಮರಿಗಳಿಗೆ ಬರುವ ರೋಗ. ಈ ರೋಗಕ್ಕೆ ತುತ್ತಾದ ಕೋಳಿಗಳು ನಿಶ್ಶಕ್ತಿಯಿಂದ ತೂಕಡಿಸುತ್ತಾ ಕೂರುತ್ತವೆ. ಹಸುರು ಮಿಶ್ರಿತ ಬೇಧಿಯಾಗುತ್ತದೆ. ರೋಗವನ್ನು ತಡೆಗಟ್ಟಲು ಆಗಾಗ್ಗೆ ಕೋಳಿಗಳ ರಕ್ತಪರೀಕ್ಷೆ ಮಾಡಿಸುತ್ತಿರಬೇಕು. ಸೂಕ್ತವಾದ ಔಷಧಿಯನ್ನು ನೀಡುವುದರ ಮೂಲಕ ರೋಗ ವಾಸಿಮಾಡಬಹುದು.

## ಪರೋಪಜೀವಿ ರೋಗಗಳು

ಪರೋಪಜೀವಿ ರೋಗಗಳಲ್ಲಿ ಒಳ ಪರೋಪಜೀವಿ ಹಾಗೂ ಹೊರ ಪರೋಪಜೀವಿ ರೋಗಗಳೆಂದು ಎರಡು ರೀತಿಗಳಿವೆ.

ಒಳ ಪರೋಪಜೀವಿಗಳಲ್ಲಿ ಜಂತುಹುಳು, ಲಾಡಿಹುಳು, ದುಂಡುಹುಳು ಮೊದಲಾದುವು ಕರುಳುಗಳಲ್ಲಿ ಸೇರಿಕೊಂಡು ರೋಗಕ್ಕೆ ಕಾರಣವಾಗುತ್ತವೆ. ದೇಹದಲ್ಲಿ ಹುಳುಗಳು ಸೇರಿಕೊಂಡು ಕೋಳಿಗಳು ರಕ್ತಹೀನತೆಯಿಂದ ಕೃಶವಾಗುತ್ತಾ ಜೂಗರಿಸುತ್ತಾ ಕುಳಿತು ಕೊಳ್ಳುತ್ತವೆ. ಸ್ವಲ್ಪ ಕಾಲಾನಂತರ ರೋಗ ಅತಿಯಾಗಿ ಸಾವನ್ನಪ್ಪುತ್ತವೆ. ರೋಗಬಾರದಂತೆ ಪ್ರತಿ ತಿಂಗಳೂ ಜಂತು ಔಷಧಿಯನ್ನು ಕುಡಿಸಬೇಕು.

ಹೊರ ಪರೋಪ ಜೀವಿಗಳೆಂದರೆ ಹೇನು, ಕೂರೆ, ಉಣ್ಣೆ, ಚಿಗಟ ಮೊದಲಾದುವು ಕೋಳಿಗಳ ಮೈಗೆ ಅಂಟಿಕೊಂಡು ರಕ್ತ ಹೀರುತ್ತಾ ಆರೋಗ್ಯಕ್ಕೆ ಧಕ್ಕೆಯುಂಟು ಮಾಡುತ್ತವೆ.

ಮೇಲಿನ ಎರಡು ಬಗೆಯ ರೋಗಗಳು ಬಾರದಂತೆ ತಡೆಗಟ್ಟಬೇಕಾದರೆ, ಕೋಳಿಗೂಡುಗಳನ್ನು ಸದಾ ಚೊಕ್ಕಟವಾಗಿಟ್ಟಿರಬೇಕು. ಆಗಾಗ್ಗೆ ಕೀಟನಾಶಕಗಳನ್ನು ಸಿಂಪಡಿಸುತ್ತಿರಬೇಕು.

## ಪೌಷ್ಟಿಕಾಂಶ ಕೊರತೆಯಿಂದ ಬರುವ ರೋಗಗಳು

ಸಮತೋಲ ಆಹಾರದ ಅಭಾವದಿಂದ ಕೋಳಿಗಳ ಬೆಳವಣಿಗೆಯಲ್ಲಿ ಕುಂದುಂಟಾಗಿ ಹಲವು ಬಗೆಯ ರೋಗಗಳು ಕಾಣಿಸಿಕೊಳ್ಳುತ್ತವೆ. ಇವುಗಳಲ್ಲಿ ರಕ್ತಹೀನತೆ, ಎಲುವು ಮುರುಟುರೋಗ, ವಕ್ರಕಾಲು ರೋಗ ಮೊದಲಾದುವು ಮುಖ್ಯವಾದುವು. ಪುಷ್ಟಿಕರವಾದ ಆಹಾರ, ಉತ್ತಮ ಪೋಷಣೆಯಿಂದ ಈ ರೋಗಗಳನ್ನು ದೂರ ಮಾಡಬಹುದು. ಕೆಲವು ಮುಂಜಾಗರೂಕತಾ ಕ್ರಮಗಳನ್ನು ಅನುಸರಿಸುವುದರಿಂದ ಈ ರೋಗಗಳು ಬಾರದಂತೆ ತಡೆಗಟ್ಟಬಹುದು.

## ಕೋಳಿಸಾಕಣೆಯ ಮಹತ್ವ

ನಮ್ಮ ದೇಶದಲ್ಲಿ ಶೇಕಡಾ ಎಪ್ಪತ್ತು ಜನ ವ್ಯವಸಾಯವನ್ನು ಅವಲಂಬಿಸಿದ್ದಾರೆ. ಅವರ ತಲಾ ಆದಾಯ ತುಂಬಾ ಕಡಿಮೆಯಿದೆ. ರೈತನು ವರ್ಷದಲ್ಲಿ ಹಲವು ತಿಂಗಳುಗಳು ಕೆಲಸ ಇಲ್ಲದೆ ಕಾಲ ಕಳೆಯುತ್ತಾನೆ. ವ್ಯವಸಾಯದ ಕೆಲಸಗಳು ಇಲ್ಲದಿರುವಾಗ ಅವನು ಕೋಳಿಸಾಕಣೆಯಂತಹ ಉದ್ಯಮವನ್ನು ಆರಂಭಿಸಬಹುದು. ಕೋಳಿಸಾಕಣೆಯಿಂದ ಸತ್ವಯುತ ಆಹಾರವಾದ ಮಾಂಸವನ್ನು ಪಡೆಯಬಹುದು. ಇತ್ತೀಚೆಗೆ ಮಾಂಸಕ್ಕಾಗಿಯೇ 'ಬ್ರಾಯಿಲರ್'

ಎಂಬ ಕೋಳಿ ತಳಿಯನ್ನು ಬೆಳೆಸುತ್ತಿದ್ದಾರೆ. ಉತ್ತಮ ಆಹಾರವಾದ ಮೊಟ್ಟೆಯನ್ನು ಉತ್ಪಾದಿಸಬಹುದು. ನಿರುದ್ಯೋಗ ನಮ್ಮಲ್ಲಿ ಅತಿಯಾಗಿದೆ. ವಿದ್ಯಾವಂತ ನಿರುದ್ಯೋಗಿಗಳು ಈ ಉದ್ಯಮವನ್ನು ಅವಲಂಬಿಸಬಹುದು. ಇದರಿಂದ ತಿಂಗಳಿಗೆ ಹೆಚ್ಚಿನ ಶ್ರಮವಿಲ್ಲದೆ ಎರಡು ಸಾವಿರ ರೂಗಳವರೆಗೆ ಸಂಪಾದಿಸಬಹುದು. ಈ ಉದ್ಯಮವನ್ನು ಆರಂಭಿಸಲಿಕ್ಕೆ ಸರ್ಕಾರ ಹಾಗೂ ಖಾಸಗಿ ಬ್ಯಾಂಕುಗಳು ಸಾಲಕೊಡುತ್ತವೆ. ಕೋಳಿಸಾಕಣೆ ದೇಶದಲ್ಲಿ ಇಂದು ಒಂದು ಉದ್ಯಮವಾಗಿ ಬೆಳೆದು ನಿಂತಿದೆ.

ಭಾರತದಲ್ಲಿ ವಾಣಿಜ್ಯ ಕೋಳಿ ಸಾಕಣೆ ೧೯೬೦ರ ಸುಮಾರಿನಲ್ಲಿ ಆರಂಭವಾಯಿತು. ಇಂದು ವಿಶ್ವದ ಕೋಳಿಸಾಕಣೆರಾಷ್ಟ್ರಗಳಲ್ಲಿ ಭಾರತ ನಾಲ್ಕನೆಯ ಸ್ಥಾನವನ್ನು ಪಡೆದಿದೆ. ವಾಣಿಜ್ಯ ಕೋಳಿಸಾಕಣೆ ನಮ್ಮ ದೇಶದಲ್ಲಿ ತ್ವರಿತಗತಿಯಿಂದ ಬೆಳೆಯುತ್ತಿದೆ.





ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು